# ಮೂಕನ ಮಕ್ಕಳು

## ಪ್ರತಿ ಹಳ್ಳಿಯಲ್ಲಿ....ಪ್ರತಿಯೊಬ್ಬರೊಳಗೆ....

### 'ಮೂಕನ ಮಕ್ಕಳು' ಕುರಿತ ಪ್ರಯೋಗ ಟಿಪ್ಪಣಿ

'ಊರು ಮೆಚ್ಚಿದರೂ ಊರ ಕೊಳಗ ಮೆಚ್ಚದು'

ಪ್ರತಿ ಹಳ್ಳಿಯಲ್ಲಿಯೂ, ಈ ಮಾತು ಎಷ್ಟು ನಿಜವೆಂದು ತೋರಿಸುವಂತೆ, ಒಬ್ಬನಿರುತ್ತಾನೆ. ಅವನೊಬ್ಬ ಗೂನನೋ, ಸ್ವಲ್ಪ ಹೆಳವನೋ, ಕೊಂಚ ಕುಂಟನೋ, ಸ್ವಲ್ಪವೇ ಬುದ್ಧಿ ಮಾಂದ್ಯನೋ, ಇಲ್ಲ. ಕೇವಲ, ತನ್ನ ಊರಿನ ಜನರ ದೃಷ್ಟಿಯಲ್ಲಿ,ಪೆದ್ದನೋ ಆಗಿರುತ್ತಾನೆ. ಅವನಿಗೆ ತನ್ನದೇ ಮನೆಮಠ, ತಂದೆ-ತಾಯಿ ಇರಬಹುದು, ಇಲ್ಲದಿರಬಹುದು; ಇದ್ದರೂ, ಇಲ್ಲ ಎನ್ನುವಂತಿರುವುದೇ ಸಾಮಾನ್ಯ. ಊರೊಟ್ಟಿಗಿನ ಮುಂದಿಗೆಲ್ಲ ಒಕ್ಕಲಾಗಿರುವ ಅವನಿಗೆ ಯಾರಾದರೂ ಊಟ ಹಾಕುತ್ತಾರೆ, ಮಲಗಲೊಂದು ಮೂಲೆ, ಹೊದೆಯಲೊಂದು ಹಚ್ಚಡ ಕೊಡುತ್ತಾರೆ. ಎಂದ ಮೇಲೆ ಅವನಿಗೆ ಮನೆಮಠವೆಲ್ಲಿ, ಯಾಕೆ; ತಂದೆ-ತಾಯಿ ಯಾರು?

ಊರಿನಲ್ಲಿ ಎಲ್ಲರೂ ಅವನಿಂದ ಕೆಲಸಮಾಡಿಸಿಕೊಳ್ಳುತ್ತಾರೆ—ಊರ ವರ ಮಕ್ಕಳೊಂದಿಗೆ ಆಟವಾಡಿ ಅವರನ್ನು ಶಾಲೆಗೆ ಬಿಟ್ಟು, ಅಲ್ಲಿಂದ ಮನೆಗೆ ಕರೆದುಕೊಂಡು ಬರುವುದರಿಂದ ಹಿಡಿದು, ಸ್ಮಶಾನಕ್ಕೆ ಹೆಣಸಾಗಿಸುವ ಕೆಲ ಸದವರೆಗೆ, ಹೊಲಗದ್ದೆ, ದನದ ಕೊಟ್ಟಿಗೆ ಮತ್ತು ಮನೆಗೆಲಸದಿಂದ ಹಿಡಿದು ಊರ ಹೆಂಗಸರ ಪೋಲಿತನಕ್ಕೊಂದು ನಿರುಪಾಯದ, ನಿರಪಾಯಕಾರೀ ಜೋಕುಮಾರನಾಗುವವರೆಗೆ ಅವನು ಅನೇಕ ಪಾತ್ರ ಗಳಲ್ಲಿ ಅನೇಕ ಕೆಲಸಗಳನ್ನು ನಿಭಾಯಿಸಬೇಕು. ಆದರೂ ಕೊನೆಗೆ,' ಊರು ಮೆಚ್ಚಿದರೂ ಊರಕೊಳಗ ಮೆಚ್ಚದು'.

ನಮ್ಮ ನಾಟಕದ ಮೂಕನ ಕಥೆ ಕೂಡ ಇಂಥದೇಯಾದರೂ ಇಲ್ಲಿ ಊರಿನ ದೊಡ್ಡ ಗೌಡರ ಅನುಕಂಪ ಅವನಿಗೊಂದಿಷ್ಟು ಆಸರೆಯಾಗುತ್ತದೆ; ಅವಧೂತರ ಆಶೀರ್ವಾದ ಮತ್ತು ಬೋಧನೆಗಳು ಅವನ ಬಾಳಿಗೊಂದು ಅರ್ಥ ಒಂದು ದಿಕ್ಕು ನೀಡುತ್ತವೆ. ಅವಧೂತರಿಂದಾಗಿ, ಹೆಣ್ಣಿಗಾಸೆಪಟ್ಟು ಸೋತು ಬೇಯುವ ಮೂಕಜೀವ ಸ್ವಂತಲಾಲಸೆಯ ಈಡೇರಿಕೆಯಲ್ಲಿನ ಸುಖಕ್ಕಿಂತ ತಾನು ಶಿಶುವೆಂದು ಒಪ್ಪಿದ ಜೀವದ ಪಾಲನೆಯಲ್ಲಿರುವ ತೃಪ್ತಿ, ಧನ್ಯತಾ ಭಾವ ದೊಡ್ಡದೆಂದು ಕಂಡುಕೊಳ್ಳುತ್ತದೆ. ಬಾಯಿಬಿಡಲಾರದವ ಸೀರೆ ರೆಯುತ್ತಾನೆ; ಎಳೆಯ ಸಸಿಗೆ ರೆಂಬೆಕೊಂಬೆ, ಬೇರುತಳಿರಿನ ಮಾತುಕೊಡು ತ್ತಾನೆ, ತಂದೆ–ತಾಯಿ ಎರಡೂ ಆಗುತ್ತಾನೆ. ಈ ನಾಟಕ ಅವನ 'ಚರಿತೆಯ ವಿಸ್ತರ'.

ಮಾಸ್ತಿಯವರ ಜನ್ಮಶತಾಬ್ಧಿಯ ಈ ವರ್ಷ ಅವರ ಕಥನಕವನ ವೊಂದನ್ನು ಆಧರಿಸಿರುವ ಪ್ರಸ್ತುತ ನಾಟಕವನ್ನು ಆಡುತ್ತಿದ್ದೇವೆ. ಈವೊತ್ತು ತಮ್ಮ ಮುಂದಿರುವ ಈ ಪ್ರಯೋಗವು ಬೇರೆಬೇರೆ ಅವಸ್ಥಾಂತರಗಳನ್ನು ದಾಟಿ ಬಂದಿದೆ. ಅಥವಾ, ಈ ವಿಷಯವನ್ನು ಇನ್ನೂ ಸರಿಯಾಗಿ ಹೇಳ ಬೇಕೆಂದರೆ, ಆ ಬೇರೆಬೇರೆ ಅವಸ್ಥಾಂತರಗಳ ಸಮರಸವೇ ಈ ಪ್ರಯೋಗ. ಮೊದಲು ನಾವು ಮಾಸ್ತಿಯವರ ಕಥನಕವನವನ್ನು ವಿವಿಧ ರೀತಿಯಲ್ಲಿ ವಾಚನಮಾಡುವ, ಹಾಡುವ ಪ್ರಯತ್ನ ಮಾಡಿದೆವು. ಅನಂತರ ನಮ್ಮ ಜೀವನಾನುಭವ, ಅವಲೋಕನಗಳ ಬಂಡವಾಳವನ್ನೆಲ್ಲ ಎರೆದು ಕವನದ ಸಾಲುಸಾಲುಗಳ ಒಳಗೆ ಮಾತ್ರವಲ್ಲ ಅವುಗಳ **ನಡುವೆ** ನಮಗೆ ಕಂಡ ಕಥೆ ಯನ್ನು ಕೂಡ ಸ್ಫೂರ್ತಿವಿಸ್ತರಣೆಯ ಮೂಲಕ 'ಆಟ'ವಾಡುತ್ತ ದೃಶ್ಯಗ ಳಲ್ಲಿ, ನಾವೇ ಸೃಷ್ಟಿಸಿದ ಪೂರಕಪಾತ್ರಗಳಲ್ಲಿ, ಕಟ್ಟಿಕೊಂಡೆವು. ಆಮೇಲೆ, ಕಥನಕವನವನ್ನು ಮತ್ತು ಅದರಿಂದ ಸ್ಫೂರ್ತಿಗೊಂಡ ನಮ್ಮ ಆಟ-ಪಾಟದ ಟಿಪ್ಪಣಿಗಳನ್ನು ಆಧರಿಸಿ, ನಮ್ಮ ಕೋರಿಕೆಯಂತೆ, ವೈದೇಹಿಯವರು ತಮ್ಮದೇ ರೀತಿಯಲ್ಲಿ ಬರೆದ ನಾಟಕ ನಮ್ಮ ಕೈಸೇರಿತು. ಆಗಲೂ ನಾವು, ವೈದೇಹಿಯವರು ಬರೆದು ಕೊಟ್ಟ ಮಾತುಗಳನ್ನು, ಅವರು ಸೃಷ್ಟಿಮಾಡಿದ ದೃಶ್ಯಗಳನ್ನು ತದ್ವತ್ ಆಡದೆ, ಆ ಎಲ್ಲ ಮಾತು ಮತ್ತು ಕ್ರಿಯಾಸರಣಿ

ಯನ್ನು, ನಮ್ಮ ಸ್ವಂತ ಪ್ರತಿಭೆ ಮತ್ತು ತಿಳುವಳಿಕೆಗಳ ಇತಿಮಿತಿಯೊಳಗೆ, ಪ್ರತ್ಯೇಕ ಪಾತ್ರನಟನೆ ಮತ್ತು ಸಾಮೂಹಿಕ ದೃಶ್ಯಸೃಷ್ಟಿಯಲ್ಲಿ ನಮ್ಮದೇ ರೀತಿಯಲ್ಲಿ ಎರೆದು. ಈ ಪ್ರಯೋಗವನ್ನು ಕಟ್ಟಿದ್ದೇವೆ, ದಿನದಿನವೂ ಹೊಸ ದಾಗಿ ಕಟ್ಟುತ್ತಿದ್ದೇವೆ.

ಅಲ್ಲಮಪ್ರಭುವಿನ ಒಂದೆರಡು ವಚನ ಮತ್ತು ಬೇಂದ್ರೆಯವರ ಒಂದು ಕವನವನ್ನು ನಾವು ನಮ್ಮ ಪ್ರಯೋಗದ ಭಾಗ ಮಾಡಿಕೊಂಡಿದ್ದೇವೆ. ಮಾಸ್ತಿಯವರಿಗೆ ಬೇಂದ್ರೆ ಬಹಳ ಪ್ರಿಯರಾಗಿದ್ದರೆಂಬುದನ್ನು ನಾವಿಲ್ಲಿ ನೆನೆಯಬೇಕು. ಬೇಂದ್ರೆಯವರಿಗೆ 'ಶಬ್ದಗಾರುಡಿಗ' ಎಂಬ ಹೆಸರು ಕೊಟ್ಟಿದ್ದು ಮಾಸ್ತಿಯವರೇ.

ಮೂಕನಂಥ ಇಂದ್ರಿಯವಿಕಲರನ್ನು ಅಭಿನಯಿಸುವಾಗ ಅವರು ಬುದ್ಧಿಮಾಂದ್ಯರೆನ್ನುವಂತೆ ತುಂಬ ಸಲೀಸಾಗಿ, ರೋಚಕವಾಗಿ ನಟಿಸಿಬಿಡಬಹುದು. ಆಗ ಒಟ್ಟು ನಾಟಕವೇ ಸಂವೇದನೆಯೇ ಇಲ್ಲದ, ಅಕ್ಷಮ್ಯವಾದ, ಕ್ರೂರವಾದ ಸುಳ್ಳಾಗುತ್ತದೆ. ಮೂಕನನ್ನು ಕಂಡರೆ ಪ್ರೇಕ್ಷಕರು ಅಪಾರವಾಗಿ ಕನಿಕರಪಡುವಂತೆ, ಭಾವುಕರಾಗಿ ಕಣ್ಣೀರು ಸುರಿಸುವಂತೆ ನಟಿಸುವುದು ಕೂಡ ಕಷ್ಟವೇನಲ್ಲ. ಇದು ಮತ್ತೊಂದು ರೀತಿಯ ಸುಳ್ಳು. ಯಾಕೆಂದರೆ ಪ್ರೇಕ್ಷಕ ಆಗ ಮೂಕನಂಥವರಿಗೆ ತಾನು ತನ್ನ ನಿಜಜೀವನದಲ್ಲಿ ತೋರಿಸಬಹುದಾದದ ಸಹಜಸ್ಪಂದನಕ್ಕೆ ಅಪಚಾರಮಾಡಿ, ನಮ್ಮ ಅಭಿನಯ ಅಥವಾ ಪ್ರದರ್ಶನದ ಮಟ್ಟಿಗೆ, ಅತಿಭಾವುಕನಾಗಿ, ತನಗೆ ತಾನೇ ಸುಳ್ಳನಾಗುವುದು ಸಾಧ್ಯವಿದೆ. ಮೊದಲನೆಯದು, ನಾವು, ನಾಟಕದವರು, ಹೇಳುವ ಸುಳ್ಳಾದರೆ ಎರಡನೆಯದು ಪ್ರೇಕ್ಷಕನನ್ನು ಸುಳ್ಳನನ್ನಾಗಿಸಿಬಿಡಬಹುದಾದ ಮಾರ್ಗ. ಈ ಎರಡನ್ನೂ ಬಿಟ್ಟು, ಸಹಜವಾದ, ಮಾನವೀಯವಾದ ಆದರೆ ಭಾವುಕವಲ್ಲದ ನಟನೆಯನ್ನು ನಾವು ಅರಸುತ್ತಿದ್ದೇವೆ. ಮೂಕನ ಪಾತ್ರಾಭಿನಯದ ಈ ಸಮತೋಲಕ್ಕೆ, ಸತ್ಯವಂತಿಕೆಗೆ ನಾಟಕದ ಇತರ ಪಾತ್ರಗಳು, ಅವನೊಡನೆ, ತಮಗೆ ತಾವು ಎಲ್ಲಿಯೂ ಸುಳ್ಳಾಗದೆ. ಅಥೆಂಟಿಕ್ಕಾಗಿ ನಡೆದುಕೊಳ್ಳುವಂತೆ ಆ ಇತರ ಪಾತ್ರಗಳನ್ನು ವಹಿಸುವ



ನಟರು ಅಭಿನಯಿಸಬೇಕಾದ್ದು ಮುಖ್ಯ. ಈ ಪ್ರಜ್ಞೆ ನಮ್ಮನ್ನು ಉದ್ದಕ್ಕೂ ಕಾಡಿದೆ, ಈಗಲೂ ನಮಗೆ ಎಚ್ಚರಿಕೆ ನೀಡುತ್ತಿದೆ.

ಅಭಿನಯದ, ದೃಶ್ಯಬಂಧದ ತಪ್ಪು-ಒಪ್ಪುಗಳೇನೇ ಇದ್ದರೂ ಇದೆಲ್ಲ ನಮ್ಮದೇ 'ಆಟ'. ಮಾಸ್ತಿಕವನದ ಕಥಾಹಂದರ, ವೈದೇಹಿ ಯವರ ದೃಶ್ಯಹಂದರ, ಬೇಂದ್ರೆ, ಅಲ್ಲಮರ ಖಡಕ್ಕಾದ ಅನುಭಾವ ಕಾರಂತರ ಸಂಗೀತ ಮತ್ತು ಮಾರ್ಗದರ್ಶನ, ವನರಂಗದ ಮಣ್ಣು ಮತ್ತು ಗಾಳಿ-ಇವುಗಳ ಮೂಸೆಯೊಳಕ್ಕೆ ನಮ್ಮ ಜೀವನಾನುಭವ ಮತ್ತು ನಟನಾ ನುಭವಗಳನ್ನು ಎರೆದು ಅವನ್ನು ನಮ್ಮ ಆಟನೋಡುವ ನಿಮ್ಮ ಅರಿವು ಮತ್ತು ಸಹೃದಯತೆಯ ಬೆಂಕಿಗೆ ಒಡ್ಡುತ್ತಿದ್ದೇವೆ. ಹೊರಬರುವುದು ಯಾವ

ಕ್ಯಾರೆಟ್ಟಿನ ಚಿನ್ನವೋ ನಮಗೆ ತಿಳಿಯದು. ಅದರ ಎಲ್ಲ ದೋಷಗಳಿಗೆ ಜವಾಬುದಾರರು ಮಾತ್ರ ನಾವೇ.

ಕೊನೆಯದಾಗಿ ಮಾಸ್ತಿಯವರ ಕಥೆಯಲ್ಲಿ ಸ್ಥಾಯಿಯಾಗಿರುವ ತಿಳಿ ಬೆಳಕು ನಮ್ಮ ಪ್ರಯೋಗದಲ್ಲಿ ಮಿಂಚಾಗುತ್ತದೆ, ಗುಡುಗಾಗುತ್ತದೆ. ಅದು ಇಲ್ಲಿ ಸಿಡಿಲಾಗಿ, ಚಂಡಮಾರುತವಾಗಿ, ಮಳೆಯಾಗಿ ಕೊನೆಗೆ ಮಾಸ್ತಿಯವರು ಬೆಳಗುವ ಅರಿವಾಗಲು, ಶಾಂತಿಯಾಗಲು ಯತ್ನಿಸುತ್ತದೆ. ಮಾಸ್ತಿಯವರಿಗೆ 'ಗೀತೆ' ಮುಖ್ಯ. ನಮಗೆ ಅದರ ಸುತ್ತೆಲ್ಲ ಇರುವ, ಅದಕ್ಕೆ ಪ್ರಚೋದಕವಾದ, ಭಾರತಕಥೆ, ಅಲ್ಲಿನ ಕುರುಕ್ಷೇತ್ರವೇ ಮುಖ್ಯ ಮಾತ್ರವಲ್ಲ, ಅನಿವಾರ್ಯವೂ ಹೌದು. ಮಾಸ್ತಿಯವರಲ್ಲಿ ಒಂದು ಕಣ್ಸನ್ನೆಯಂತೆ ಬರುವುದು ನಮ್ಮ ಪ್ರಯೋಗದಲ್ಲಿ ತುಂಬ ನಾಟಕೀಯವೇಯಾದಂಥ ಭಂಗಿಯಾಗುತ್ತದೆ. ಅವರಲ್ಲಿ ಕಾಮ ಕರ್ಪೂರದಂತೆ ಉರಿದು ಹೋಗುತ್ತ ದಿವ್ಯಾಗ್ನಿಯಾಗಿ ತಣ್ಣಗೆ ಬೆಳಗುತ್ತಾನೆ, ನಮ್ಮಲ್ಲಿ ಅವನು ಭುಗಿಲ್ಲೆಂದು ಹೊತ್ತಿಕೊಂಡು ಕೆಂಡವಾಗುತ್ತಲೆ ದ್ರವಿಸುತ್ತ ಸುತ್ತಲೂ ವಾಸನೆಯಾಗಿ ಹಬ್ಬುವ, ಹಂಚಿಹೋಗುವ ಸಾಂಬ್ರಾಣಿಯಾಗುತ್ತಾನೆ.

ನಾಟಕದ ಕಾಯಕವೇ ಅಂಥದು. ಅದು, ಭರತಮುನಿ ಹೇಳುವಂತೆ, 'ಲೋಕ ಚರಿತ'. ಲೋಕಾನುಭವದ ಸಾಂಬ್ರಾಣಿಯನ್ನು ಉತ್ಕಟವಾಗಿ ಆದರೆ ಹದವರಿತು ಸುಡುತ್ತ, ಕಲೆಯ ರೂಪದಲ್ಲಿ ಆಡಲು ಬೇಡುವ ಈ ಕಾಯಕ ಕೊನೆಗೆ ಕರ್ಪೂರದ ದೀಪವಾಗಬೇಕಾದ್ದು, ಮಾಸ್ತಿಯವರ 'ಗೀತೆ'ಯಾಗಬೇಕಾದ್ದು ಸಹೃದಯರ ಪ್ರಬುದ್ಧ ಅರಿವಿನಲ್ಲಿ. ನಮ್ಮ ಪ್ರತಿಯೊಬ್ಬರಲ್ಲಿ ಇರುವ ರೋಚಕ ಪ್ರಿಯತೆಗೆ ಇದು ಸಾಂಬ್ರಾಣಿ, ನಮ್ಮ ಅರಿವಿಗೆ, ಕರ್ಪೂರ. ಕಿರಿಯರಿಗೆ, ಎಳೆಯ ಪ್ರಜ್ಞೆಗೆ ಒಂದು, ಹಿರಿಯರಿಗೆ, ಪ್ರಬುದ್ಧ ಪ್ರಜ್ಞೆಗೆ, ಮತ್ತೊಂದು ಅಲ್ಲ, **ಎರಡೂ.** ಹೀಗೆ, ನಮ್ಮ 'ಮೂಕನ ಮಕ್ಕಳು' ಮಕ್ಕಳ ನಾಟಕವೂ ಹೌದು, ವಯಸ್ಕರ ನಾಟಕವೂ ಹೌದು ಎನ್ನಿಸಿಕೊಳ್ಳಲು ಪ್ರಯತಿಸಿದೆ.

ಮೂಲಕಥನಕವನ – ಮಾಸ್ತಿ ವೆಂಕಟೇಶ ಅಯ್ಯಂಗಾರ್

ನಾಟಕ ರಚನೆ – ವೈದೇಹಿ

ಸಂಗೀತ, ನಿರ್ದೇಶನ – ಬಿ. ವಿ. ಕಾರಂತ